# ಕರ್ನಾಟಕ ವಿಧಾನ ಪರಿಷತ್ತು

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1157

2] ಮಾನ್ಯ ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

3] ಉತ್ತರಿಸುವ ದಿನಾಂಕ : 23.12.2021

4] ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಪೊಲೀಸ್ ಇಲಾಖೆಯಲ್ಲಿ ಔರಾದ್ಕರ್ ಸಮಿತಿಯ ರಚನೆಯ ಉದ್ದೇಶಗಳೇನು: (ವಿವರ ನೀಡುವುದು) | ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಯ ಅಧಿಕಾರಿ/ ಸಿಬ್ಬಂದಿಗಳ ವೇತನ ಶ್ರೇಣಿಗಳಿಗೂ ಇತರೆ ರಾಜ್ಯಗಳ ಪೊಲೀಸ್ ಇಲಾಖೆಯ ಅಧಿಕಾರಿ/ ಸಿಬ್ಬಂದಿಗಳ ವೇತನ ಶ್ರೇಣಿಗಳಿಗೂ ಬಹಳಷ್ಟು ತಾರತಮ್ಯ ಇದ್ದುದರಿಂದ, ಈ ವೇತನ ಶ್ರೇಣಿಯ ತಾರತಮ್ಯವನ್ನು ಸಮತೋಲನಗೊಳಿಸುವುದು ಪೊಲೀಸ್ ಇಲಾಖೆಯ ಸಿಬ್ಬಂದಿಗಳ ಬೇಡಿಕೆಯಾಗಿತ್ತು. ಈ ವೇತನ ಶ್ರೇಣಿ ತಾರತಮ್ಯವನ್ನು ಸಮತೋಲನಗೊಳಿಸುವ ಸಲುವಾಗಿ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಶ್ರೇಣಿಯ ಪರಿಷ್ಕರಣೆಯ ಕುರಿತು ರಾಜ್ಯ ಸರ್ಕಾರವು ಶ್ರೀ ರಾಘವೇಂದ್ರ ಔರಾದ್ಕರ್‌ರವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ದಿನಾಂಕ: 28.06.2016 ರಲ್ಲಿ ರಚಿಸಿರುತ್ತದೆ. |
| ಆ) | ಔರಾದ್ಕರ್ ವರದಿಯ ಶಿಫಾರಸ್ಸುಗಳೇನು; (ವಿವರ ನೀಡುವುದು) | ಅನುಬಂಧ-ಅ ರಲ್ಲಿ ಉತ್ತರಿಸಲಾಗಿದೆ. |
| ಇ) | ಔರಾದ್ಕರ್ ಸಮಿತಿಯ ಶಿಫಾರಸ್ಸಿನಂತೆ ಪರಿಷ್ಕರಣೆಗೊಂಡಿರುವ ವೇತನ ಭತ್ಯೆಗಳಲ್ಲಿ ಹಾಲಿ ಸೇವಾನಿರತ ಪೊಲೀಸ್ ಮತ್ತು ಸಿಬ್ಬಂದಿಗಳಿಗೆ ವೇತನ ತಾರತಮ್ಯ ಉಂಟಾಗಿ, ಅನ್ಯಾಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನುಬಂಧ-ಆ ರಲ್ಲಿ ಉತ್ತರಿಸಲಾಗಿದೆ. |
| ಈ) | ಹಾಗಿದ್ದಲ್ಲಿ, ತಾರತಮ್ಯವನ್ನು ಸರಿದೂಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | |

**ಸಂಖ್ಯೆ: ಹೆಚ್‌ಡಿ 118 ಇಎಫ್‌ಎಸ್ 2021**

[ಆರಗ ಜ್ಞಾನೇಂದ್ರ]
ಗೃಹ ಸಚಿವರು

ಅನುಬಂಧ–'ಅ'

ಕರ್ನಾಟಕ ಪೊಲೀಸ್ ಇಲಾಖೆಯ ವೃಂದದ ಹುದ್ದೆಗಳ ವೇತನ ಶ್ರೇಣಿಗಳಿಗೂ ಇತರೆ ಇಲಾಖೆಯ ವೇತನ ಶ್ರೇಣಿಗಳಿಗಳು ಬಹಳಷ್ಟು ತಾರತಮ್ಯ ಇದ್ದುದರಿಂದ, ಈ ವೇತನ ಶ್ರೇಣಿಯ ತಾರತಮ್ಯವನ್ನು ಸಮತೋಲನಗೊಳಿಸುವುದು ಪೊಲೀಸ್ ಇಲಾಖೆಯ ಸಿಬ್ಬಂದಿಗಳ ಬೇಡಿಕೆಯಾಗಿತ್ತು. ಈ ವೇತನ ಶ್ರೇಣಿ ತಾರತಮ್ಯವನ್ನು ಸಮತೋಲನಗೊಳಿಸುವ ಸಲುವಾಗಿ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನಶ್ರೇಣಿಯ ಪರಿಷ್ಕರಣೆಯ ಕುರಿತು ರಾಜ್ಯ ಸರ್ಕಾರವು, ಶ್ರೀ ರಾಘವೇಂದ್ರ ಔರಾದ್ಕರ್‌ರವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ದಿನಾಂಕ:28.06.2016 ರಲ್ಲಿ ರಚಿಸಿರುತ್ತದೆ. ಸರ್ಕಾರದ ಆದೇಶದಂತೆ ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯು ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಪರಿಷ್ಕರಣೆ ಸಂಬಂಧಿಸಿದಂತೆ ಈ ಕೆಳಕಂಡ ಶಿಫಾರಸ್ಸುಗಳೊಂದಿಗೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ;

| Sl. No. | Rank | Existing scale | Proposed scale | Raise in Levels |
|---|---|---|---|---|
| 1 | Follower | 10400-16400 | 11000-19000 | One Level |
| 2 | Jamedar Follower | 11600-21000 | 12500-24000 | Two Levels |
| 3 | Police Constable | 11600-21000 | 12500-24000 | One Level |
| 4 | Head Constable | 12500-24000 | 14550-26700 | Two Levels |
| 5 | Asst. Sub Inspector | 14550-26700 | 20000-36300 | Three Levels* |
| 6 | Police Sub Inspector | 20000-36300 | 22800-43200 | Two Levels |
| 7 | Police Inspector | 21600-40050 | 28100-50100 | Four Levels* |
| 8 | Dy. Supdt. of Police | 28100- 50100 | 30400-51300 | One Level |
| 9 | Superintendent of Police | 36300-53850 | 40050-56550 | Two Levels |

ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯು ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ಸಮವಸ್ತ್ರ ಭತ್ಯೆ, ಸಾರಿಗೆ ಭತ್ಯೆ, ಕಷ್ಟ ಪರಿಹಾರ ಭತ್ಯೆ, ಗಂಡಾಂತರ ಭತ್ಯೆ, ಶ್ರಮದಾನ ಭತ್ಯೆ ಹಾಗೂ ಸದೃಢ ಭತ್ಯೆಗಳನ್ನು ಪರಿಷ್ಕರಣೆ ಮಾಡಲು ಶಿಫಾರಸ್ಸು ಮಾಡಿರುತ್ತದೆ.

-----

## ಅನುಬಂಧ–'ಅ'

## ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿ ವರದಿಯ ಅನುಷ್ಠಾನ ಜಾರಿಗಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ

**ವೇತನ ಶ್ರೇಣಿ ಪರಿಷ್ಕರಣೆಯ ಅನುಷ್ಠಾನ:**

ಶ್ರೀ ರಾಘವೇಂದ್ರ ಔರಾದ್ಕರ್ ವರದಿಯ ಶಿಫಾರಸ್ಸುಗಳನ್ನು ಭಾಗಶಃ ಅಂಗೀಕರಿಸಿದ ರಾಜ್ಯ ಸರ್ಕಾರವು ಆದೇಶ ಸಂಖ್ಯೆ: ಆಇ/9/ಎಸ್ಆರ್‌ಪಿ/2019, ದಿನಾಂಕ: 16.07.2019 ರಲ್ಲಿ ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಶ್ರೇಣಿಗಳನ್ನು ದಿನಾಂಕ: 01.08.2019 ರಿಂದ ಜಾರಿಗೆ ಬರುವಂತೆ, ಈ ಕೆಳಕಂಡಂತೆ ಪರಿಷ್ಕರಣೆ ಮಾಡಿರುತ್ತದೆ.

| Sl. No. | Rank | Revised Pay Scale (As per 6th Pay Commission) ₹ | Raise in Levels | Total Policemen Benefited |
|---|---|---|---|---|
| 1 | Police Constable | 23,500-47,650 | One Level | 42757 |
| 2 | Head Constable | 27,650-52,650 | Two Level | 27111 |
| 3 | Asst. Sub Inspector | 30,350-58,250 | One Level | 9030 |
| 4 | Police Inspector | 43,100-83,900 | One Level | 1511 |
| 5 | SP (non-IPS) | 70,850-1,07,100 | One Level | 127 |
| | **TOTAL** | | | **80536** |

ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿ ವರದಿಯ ಅನುಷ್ಠಾನದಿಂದ ಅನುಯಾಯಿ, ಜಮೇದಾರ್ ಅನುಯಾಯಿ, ಪಿ.ಎಸ್.ಐ ಹಾಗೂ ಪೊಲೀಸ್ ಉಪಾಧೀಕ್ಷಕರುಗಳ ವೇತನ ಶ್ರೇಣಿ ಪರಿಷ್ಕರಣೆಗಳನ್ನು ಹೊರತುಪಡಿಸಿ ಇತರೆ ಎಲ್ಲಾ ವೃಂದದ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಶ್ರೇಣಿಗಳು ಪರಿಷ್ಕರಣೆಯಾಗಿ ಅನುಕೂಲವಾಗಿರುತ್ತವೆ.

**ಭತ್ಯೆ ಪರಿಷ್ಕರಣೆ ಅನುಷ್ಠಾನ:**

ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯು ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ಭತ್ಯೆಯನ್ನು ಪರಿಷ್ಕರಿಸುವಂತೆ ಮಾಡಿದ್ದ ಶಿಫಾರಸ್ಸುಗಳನ್ನು ಅಂಗೀಕರಿಸಿದ ಮಾನ್ಯ ಘನ ಸರ್ಕಾರವು, ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ಭತ್ಯೆಗಳನ್ನು ಈ ಕೆಳಕಂಡಂತೆ ಪರಿಷ್ಕರಿಸಿರುತ್ತದೆ;

| ಕ್ರ ಸಂ. | ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ: | ಭತ್ಯೆಗಳ ವಿವರ | ಭತ್ಯೆಯ ಮೊತ್ತ |
|---|---|---|---|
| 1 | ಎಫ್.ಡಿ 47 ಎಸ್ಆರ್‌ಪಿ 2016(1), ದಿನಾಂಕ: 21.11.2016 | ಸಮವಸ್ತ್ರ ಭತ್ಯೆ | 500.00 |
| 2 | ಎಫ್.ಡಿ 47 ಎಸ್ಆರ್‌ಪಿ 2016(11), ದಿನಾಂಕ: 21.11.2016 | ಸಾರಿಗೆ ಭತ್ಯೆ | 600.00 |

...2

| | | | |
|---|---|---|---|
| 3 | ಆದೇಶ ಸಂಖ್ಯೆ: ಆಇ 6 ಎಸ್‌ಆರ್‌ಪಿ 2019, ದಿನಾಂಕ: 18.10.2019 | ಕಷ್ಟ ಪರಿಹಾರ ಭತ್ಯೆ | |
| | | ಅನುಯಾಯಿ | 2000.00 |
| | | ಪಿ.ಸಿ | 3000.00 |
| | | ಹೆಚ್.ಸಿ | 2000.00 |
| | | ಎ.ಎಸ್.ಐ | 2000.00 |
| | | ಪಿ.ಎಸ್.ಐ | 2000.00 |
| | | ಪಿ.ಐ | 1000.00 |

ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿ ವರದಿಯಲ್ಲಿ ಶಿಫಾರಸ್ಸು ಮಾಡಿರುವ ಕೆಲವು ಭತ್ಯೆಗಳನ್ನು ಸರ್ಕಾರವು ಹೆಚ್ಚಿಸಿರುತ್ತದೆ (ಸಮವಸ್ತ್ರ ಭತ್ಯೆ, ಸಾರಿಗೆ ಭತ್ಯೆ ಮತ್ತು ಕಷ್ಟ ಪರಿಹಾರ ಭತ್ಯೆ). ಈ ಭತ್ಯೆಗಳು ಪೊಲೀಸ್ ಇಲಾಖೆಯ ಪಿಎಸ್ಐ ಹಾಗೂ ಅನುಯಾಯಿ ವೃಂದದ ಅಧಿಕಾರಿ/ಸಿಬ್ಬಂದಿಗಳಿಗೂ ಸಹ ಅನ್ವಯಿಸುವುದರಿಂದ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಒಟ್ಟು 84773 ಅಧಿಕಾರಿ ಮತ್ತು ಸಿಬ್ಬಂದಿಯವರುಗಳಿಗೆ ಅನುಕೂಲವಾಗಿದೆ.

-----